

# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: | 164 |
| ಮಾನ್ಯ ಸದಸ್ಯರ ಹೆಸರು | ಶ್ರೀ ಶಶಿಲ್ ಜಿ. ನಮೋಶಿ (ಶಿಕ್ಷಕರ ಕ್ಷೇತ್ರ) |
| ಉತ್ತರಿಸುವ ಸಚಿವರು | ಉಪ ಮುಖ್ಯಮಂತ್ರಿಗಳು (ಉನ್ನತ ಶಿಕ್ಷಣ) |
| ಉತ್ತರಿಸಬೇಕಾದ ದಿನಾಂಕ | 01.02.2021 |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ಕಲಬುರಗಿ ವಿಶ್ವವಿದ್ಯಾಲಯದಲ್ಲಿ ಮಂಜೂರಾಗಿರುವ ಭೋದಕ ಹಾಗೂ ಬೋಧಕೇತರ ಹುದ್ದೆಗಳು ಎಷ್ಟು; | ಮಂಜೂರಾದ ಬೋಧಕ ಹುದ್ದೆಗಳ ಸಂಖ್ಯೆ: 248<br>ಮಂಜೂರಾದ ಬೋಧಕೇತರ ಹುದ್ದೆಗಳ ಸಂಖ್ಯೆ: 707 |
| (ಆ) | ಪ್ರಸ್ತುತ ಖಾಲಿ ಇರುವ ಹುದ್ದೆಗಳ ಸಂಖ್ಯೆ ಎಷ್ಟು; | ಖಾಲಿ ಇರುವ ಬೋಧಕ ಹುದ್ದೆಗಳು – 187<br>ಬೋಧಕೇತರ ಹುದ್ದೆಗಳು – 484 |
| (ಇ) | ಖಾಲಿ ಇರುವ ಹುದ್ದೆಗಳನ್ನು ಯಾವಾಗ ಭರ್ತಿ ಮಾಡಲಾಗುವುದು; | ಆರ್ಥಿಕ ಇಲಾಖೆಯು ಸುತ್ತೋಲೆ ಸಂಖ್ಯೆ: ಆಇ 03 ಬಿಇಎಂ 2020, ದಿನಾಂಕ: 06-07-2020ರಲ್ಲಿ ರಾಜ್ಯದಲ್ಲಿ ಕೋವಿಡ್-19 ಸಾಂಕ್ರಾಮಿಕ ರೋಗದಿಂದ ಉಂಟಾದ ಪರಿಸ್ಥಿತಿಯನ್ನು ನಿಬಾಯಿಸಿ ಆರ್ಥಿಕ ಸ್ಥಿತಿಯನ್ನು ಸುಸ್ಥಿತಿಗೆ ತರುವ ನಿಟ್ಟಿನಲ್ಲಿ ಸಂಪನ್ಮೂಲವನ್ನು ಕ್ರೂಢೀಕರಿಸುವುದು ಅಗತ್ಯವಾಗಿರುತ್ತದೆ.<br>ಇದಕ್ಕಾಗಿ ಸರ್ಕಾರದ ವೆಚ್ಚದ ಬಾಬ್ತಿನಲ್ಲಿ ಮಿತವ್ಯಯ ಪಾಲಿಸುವ ಅವಶ್ಯಕತೆ ಇದೆ. ಈ ನಿಟ್ಟಿನಲ್ಲಿ 2020-21ನೇ ಸಾಲಿನ ಆರ್ಥಿಕ ವರ್ಷದಲ್ಲಿ ಕಲ್ಯಾಣ ಕರ್ನಾಟಕ ವೃಂದದ ಹುದ್ದೆಗಳು ಮತ್ತು ಬ್ಯಾಕ್ ಲಾಗ್ ಹುದ್ದೆಗಳು ಸೇರಿದಂತೆ ಎಲ್ಲಾ ನೇರ ನೇಮಕಾತಿ ಹುದ್ದೆಗಳನ್ನು ಭರ್ತಿ ಮಾಡುವುದನ್ನು ಮುಂದಿನ ಆದೇಶದವರೆಗೆ ತಡೆಹಿಡಿಯಲಾಗಿದೆ.<br>ಆರ್ಥಿಕ ಇಲಾಖೆಯು ಹುದ್ದೆಗಳ ಭರ್ತಿಗೆ ವಿಧಿಸಿದ ನಿರ್ಬಂಧವನ್ನು ತೆರವುಗೊಳಿಸಿದ ನಂತರ ಖಾಲಿ ಇರುವ ಹುದ್ದೆಗಳನ್ನು ಭರ್ತಿ ಮಾಡಲು ಕ್ರಮವಹಿಸಲಾಗುವುದು. |
| (ಈ) | ಖಾಲಿ ಇರುವ ಬೋಧಕ/ಬೋಧಕೇತರ ಹುದ್ದೆಗಳ ಕಾರಣದಿಂದ ವಿಶ್ವವಿದ್ಯಾಲಯದ ಶೈಕ್ಷಣಿಕ ಗುಣಮಟ್ಟ ಕುಸಿದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; (ವಿವರ ನೀಡುವುದು) | ಬಂದಿಲ್ಲ. |

ಸಂಖ್ಯೆ: ಇಡಿ 10 ಯುಜಿವಿ 2021

(ಡಾ: ಅಶ್ವಥ್ ನಾರಾಯಣ ಸಿ.ಎನ್.)
ಉಪ ಮುಖ್ಯಮಂತ್ರಿಗಳು
(ಉನ್ನತ ಶಿಕ್ಷಣ, ಐಟಿ & ಬಿಟಿ,
ವಿಜ್ಞಾನ ಮತ್ತು ತಂತ್ರಜ್ಞಾನ, ಕೌಶಲ್ಯಾಭಿವೃದ್ಧಿ,
ಉದ್ಯಮಶೀಲತೆ ಮತ್ತು ಜೀವನೋಪಾಯ ಇಲಾಖೆ).